ಡಾ|| ಕೆ. ಜಿ. ಭಟ್‌ಸೂರಿ*

# ಮುರುಕನಹಳ್ಳಿ ಶ್ರೀಕಂಠೇಶ್ವರ ದೇವಾಲಯ-ಒಂದು ಟಿಪ್ಪಣಿ

ಮುರುಕನಹಳ್ಳಿ ಮಂಡ್ಯ ಜಿಲ್ಲೆ, ಕೆ. ಆರ್. ಪೇಟೆ ತಾಲ್ಲೂಕಿನಿಂದ ದಕ್ಷಿಣ ಪೂರ್ವಾಭಿಮುಖವಾಗಿ ೭ ಕಿ.ಮೀ. ಅಂತರದಲ್ಲಿದೆ. ಊರಿನ ಪೂರ್ವ ಪಶ್ಚಿಮಾಭಿಮುಖವಾಗಿ ೧ ಕಿ. ಮೀ. ಅಂತರದಲ್ಲಿ ಶ್ರೀಕಂಠೇಶ್ವರ ದೇವಾಲಯವಿದೆ. ಮೊದಲು ಈ ದೇವಾಲಯ ಪೂರ್ತಿಯಾಗಿ ಮಣ್ಣಿನಿಂದ ಮುಚ್ಚಲ್ಪಟ್ಟಿದ್ದು, ಆಕಸ್ಮಿಕವಾಗಿ ಗ್ರಾಮಸ್ಥರೊಬ್ಬರ ಗಮನಕ್ಕೆ ಬಂದು ಮಣ್ಣನ್ನು ತೆಗೆದಾಗ ಹೊಯ್ಸಳರ ಕಾಲಕ್ಕೆ ಸೇರಿದ ದೇವಾಲಯಕ್ಕೆ ಸಂಬಂಧಿಸಿದ ಸ್ತಂಭ, ಶಿಖರಭಾಗ, ಹಾಸುಗಲ್ಲುಗಳು, ಶಿಲಾಶಾಸನಗಳು ದೊರೆತವು

ಅಳಿದುಳಿದ ಶ್ರೀಕಂಠೇಶ್ವರ ದೇವಾಲಯದ ಈಗಿನ ಸ್ಥಿತಿ ಶ್ರೀಕಂಠೇಶ್ವರ ದೇವಾಲಯ ಪೂರ್ವಾಭಿಮುಖವಾಗಿದ್ದು, ಹಿಂದಿನ ಅರ್ಧಭಾಗ ಈಗಲೂ ಮಣ್ಣಿನಿಂದ ಆವೃತವಾಗಿದೆ. ಈ ದೇವಾಲಯದ ಉದ್ದಗಲ ೮ ಮೀ., ೬.೭೫ ಮೀ. ಮತ್ತು ಎತ್ತರ ಎರಡೂವರೆ ಮೀ. ಇದೆ. ಗರ್ಭಗೃಹದಲ್ಲಿನ ಶಿವಲಿಂಗ ಸ್ವಲ್ಪ ಸವೆದಿದ್ದು, ಮೇಲ್ಭಾಗ ಸಪಾಟಾಗಿದ್ದು, ಚೌಕಾಕಾರದ ಪೀಠದಲ್ಲಿದೆ. ಪೀಠಭಾಗ ಸ್ವಲ್ಪ ಮುರಿದಿದೆ. ಇದರ ಕಾಲ ಕ್ರಿ. ಶ. ಸುಮಾರು ೧೨ನೇ ಶತಮಾನ. ಗರ್ಭಗೃಹ ಚೌಕಾಕಾರವಾಗಿದ್ದು, ಮೇಲ್ಭಾಗ ಅಥವಾ ಮೇಲ್ಛಾವಣಿ ಇಲ್ಲದೇ ಸಪಾಟಾಗಿ ಹಾಸುಗಲ್ಲಿನಿಂದ ಹಾಸಲ್ಪಟ್ಟಿದೆ. ಗರ್ಭಗೃಹದ ಬಾಗಿಲುವಾಡದಲ್ಲಿ ಅಥವಾ ದ್ವಾರಪಟ್ಟಿಯ ಮೇಲೆ ಯಾವುದೇ ಕೇಂದ್ರೀಯ ಲಲಾಟ ಬಿಂಬವಿರದೇ ಕೇವಲ ಕಲ್ಲಿನ ತೊಲೆಯಿದ್ದು ಅದು ಮೂಲ ರೂಪದಲ್ಲಿರುವುದು ಇದರ ವಿಶೇಷತೆ.

ನವರಂಗ ಅಥವಾ ಸಭಾಮಂಟಪದ ಮೇಲ್ಛಾವಣಿ ಅರ್ಧ ಮುಚ್ಚಲ್ಪಟ್ಟಿದೆ. ಇನ್ನುಳಿದ ಅರ್ಧ ಭಾಗದ ಹಾಸುಗಲ್ಲುಗಳೆಲ್ಲವೂ ದೇವಾಲಯದ ಎಡಭಾಗದ ಮಣ್ಣಿನಲ್ಲಿ ಹೂತಿದೆ. ಉತ್ತರ ಭಾಗದ ಭಿತ್ತಿ ತೆರೆದಿದ್ದು, ಈಗ ಅಲ್ಲಿ ಅಡ್ಡವಾಗಿ ಹಾಸುಗಲ್ಲು ಇಡಲಾಗಿದೆ. ಸಭಾಮಂಟಪದ ಮಧ್ಯದಲ್ಲಿನ ನಾಲ್ಕು ಸ್ತಂಭಗಳು ಒಂದೇ ತೆರನಾಗಿದ್ದು. ಬುಡಭಾಗ ಚೌಕಾಕಾರ, ವರ್ತುಲಾಕೃತಿಯ ಆಮಲಕಗಳನ್ನೊಳಗೊಂಡಿದೆ. ನಾಲ್ಕು ಸ್ತಂಭಗಳು ಹೊತ್ತ ಮೇಲ್ಛಾವಣಿಯು ಭುವನೇಶ್ವರಿಯಾಗಿದ್ದು, ಆಳದಲ್ಲಿ ಪದ್ಮವನ್ನೊಳಗೊಂಡಿರುವುದು ಇದರ ಇನ್ನೊಂದು ವೈಶಿಷ್ಟ್ಯ.

ದಕ್ಷಿಣ ಭಾಗದ ಭಿತ್ತಿಯಲ್ಲಿನ ಗೂಡಿನಲ್ಲಿ ಮಧುಸೂಧನಮೂರ್ತಿ ಸಮಭಂಗಿಯಲ್ಲಿದ್ದು, ಮೂರ್ತಿಶಿಲ್ಪದ ದೃಷ್ಟಿಯಿಂದ ವೈಶಿಷ್ಟ್ಯ ಪೂರ್ಣವಾಗಿದೆ. ಮಧುಸೂಧನ ಕರಂಡ ಮಕುಟ, ವರ್ತುಲಾಕಾರದ ಕಿವಿಯೋಲೆ, ಅಗಲವಾದ ಕಂಠಾಭರಣ, ಪಟಿಖಿಲಾ ಕೆಳವಸ್ತ್ರದ ಮೇಲೆ ಹರಡಿದೆ. ಯಜ್ಞೋಪವೀತ, ವೈಜಯಂತಿ ಹಾರ, ಕೈಬಳೆ ಮತ್ತು ಕಾಲ್ಗಡಗ ಧರಿಸಿದ್ದಾನೆ. ಬಲಗೈ ಶಂಖ, ಪದ್ಮ (ಮುರಿದಿದೆ), ಎಡಗೈ ಚಕ್ರ ಗಧಾ (ಮುರಿದಿದ) ಹಿಡಿದಿದೆ. ಪ್ರಭಾವಳಿ

* ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯ ಇಲಾಖೆ, ಕರ್ನಾಟಕ ಸರ್ಕಾರ, ಮೈಸೂರು.

ನಾಗತೋರಣಾಲಂಕೃತವಾಗಿದ್ದು, ಕಲೆಯ ದೃಷ್ಟಿಯಿಂದ ಇದರಲ್ಲಿ ಪ್ರತಿಬಿಂಬಿತವಾಗಿದೆ. ಈ ಮೂರ್ತಿಯ ಕಾಲ ಸುಮಾರು ಕ್ರಿ. ಶ. ೧೧-೧೨ನೇ ಶತಮಾನ.

ಹೊರ ಬದಿಯಲ್ಲಿರುವ ಕನ್ನಡ ಶಿಲಾಶಾಸನ ಶಿವ ಸ್ತುತಿಯಿಂದ ಪ್ರಾರಂಭವಾಗಿದೆ. ಇದು ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ ಸೇರಿದುದು. ಮುರುಕನಹಳ್ಳಿ ಗ್ರಾಮ ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲಾ ದೇವಿಗೆ ಸೇರಿದ ದತ್ತಿ ಗ್ರಾಮವಾಗಿದ್ದು. ಮುರುಕನಹಳ್ಳಿ 'ಮೊದರನಾಡ ೭೦'ರಲ್ಲಿ ಒಳಗೊಂಡಿದ್ದು, ಅಮೃತರಾಶಿ ಪಂಡಿತರಿಂದ ಪ್ರತಿಷ್ಠಾಪಿಸಲ್ಪಟ್ಟ ದೇವರಿಗೆ ಭೂಮಿಯನ್ನು ದಾನವಾಗಿ ಕೊಟ್ಟಿದ್ದನ್ನು ಈ ದಾನವನ್ನು ರಾಚಶೆಟ್ಟಿಯ ಮಗ ಮುದ್ದಮ್ಮನ ಮಗ ಬಾಣಗೊಂಡನು ಮಾಡಿದನೆಂಬುದನ್ನು ತಿಳಿಸುತ್ತದೆ. ಈ ಶಾಸನವನ್ನು ಬರೆದವನ ಹೆಸರು 'ಸಿರಿಯಾಚಾರಿ' ಎಂದಿದೆ.

ಹೀಗೆ ಅಂದು ಮಣ್ಣಲ್ಲಿ ಮುಚ್ಚಲ್ಪಟ್ಟಿದ್ದ ಇಂದು ಬೆಳಕು ಕಂಡ ಶ್ರೀಕಂಠೇಶ್ವರ ದೇವಾಲಯವು ಕಲೆ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ತನ್ನದೇ ಆದ ಮಹತ್ವದ ಸ್ಥಾನವನ್ನು ಗಳಿಸಿದೆ. ಈ ದೇವಾಲಯ ಹೊಯ್ಸಳರ ಕಾಲಕ್ಕೆ ಸೇರಿದ್ದೆಂದು ಹೇಳಲಾದರೂ ಭಿತ್ತಿಯ ಕೆತ್ತನೆ ಮತ್ತು ಸ್ಥಂಬದ ಮಾದರಿ ಚೋಳರ ಕಾಲದಲ್ಲಿನ ದ್ರಾವಿಡ ವಾಸ್ತುಕಲೆಯನ್ನು ಹೋಲುತ್ತದೆ. ದೇವಾಲಯದ ಹೊರಗಿನ ಅಪ್ರಕಟಿತ ಶಾಸನ 'ಮುರುಕನಹಳ್ಳಿ' ಗ್ರಾಮ ರಾಣಿ ಶಾಂತಲಾದೇವಿಗೆ ಸೇರಿದ ಗ್ರಾಮವಾಗಿತ್ತೆಂಬ ವಿಷಯದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ.